# ಗುಹೇಶ್ವರಲಿಂಗಕ್ಕೆ ವಿಳಾಸವಾದ ಸಂಗನಬಸವಣ್ಣ!

ಬಸವಣ್ಣನವರ ಅಪೂರ್ವ ಆಚಾರವಿಚಾರಗಳನ್ನು ಕಂಡ ವ್ಯೋಮಕಾಯಸಿದ್ಧ ಅಲ್ಲಮ ಪ್ರಭುದೇವರು ತಮ್ಮ ಒಂದು ವಚನದಲ್ಲಿ **"ಗುಹೇಶ್ವರಲಿಂಗಕ್ಕೆ ವಿಳಾಸವಾದೆಯಲ್ಲಾ ಸಂಗನಬಸವಣ್ಣಾ !"** ಎಂದು ಮೆಚ್ಚುಗೆಯ ನುಡಿಯನ್ನು ನುಡಿಯುತ್ತಾರೆ.

ದೇವರಿಗೆ ವಿಳಾಸವಾದ ಅಪೂರ್ವ ನಡೆನುಡಿ ಗುರು ಬಸವಣ್ಣನವರದು.

ದೇವರಿಗೆ ವಿಳಾಸವಾಗುವುದು ಎಂದರೇನು ಎಂಬುದನ್ನು ಸ್ವಲ್ಪ ತಿಳಿದುಕೊಳ್ಳೋಣ.

ಯಾವುದೇ ಒಬ್ಬವ್ಯಕ್ತಿಗೆ ಬರೆದ ಪತ್ರ ಆತನಿಗೆ ತಲುಪಬೇಕಾದರೆ, ಆತನ ಸರಿಯಾದ ಹೆಸರು ಮತ್ತು ಆತ ಇರುವ ಸ್ಥಳದ ಸರಿಯಾದ ವಿಳಾಸ ಪತ್ರದ ಮೇಲೆ ನಮೂದಾಗಿರಬೇಕು. ಸರಿಯಾದ ಹೆಸರು ಅಥವಾ ವಿಳಾಸ, ಎರಡರಲ್ಲಿ ಯಾವುದಾದರೂ ಒಂದು ತಪ್ಪಾದರೂ ಸಹ ಆ ಪತ್ರ ಉದ್ದೇಶಿತ ವ್ಯಕ್ತಿಗೆ ತಲುಪದೇ ಇರಬಹುದು.

ಇದೇ ರೀತಿ ದೇವರು ಎಂದರೆ ಯಾರು ಎಂದು ಸರಿಯಾಗಿ ಗೊತ್ತಿರುವುದರ ಜೊತೆಗೆ, ಆತ ಎಲ್ಲಿದ್ದಾನೆಂಬುದೂ ಸಹ ಗೊತ್ತಾದರೆ ಮಾತ್ರ, ಆತನನು ಕಾಣಬಹುದು. ದೇವರು ಎಂದರೆ ಯಾರು ಎಂದು ಸರಿಯಾಗಿ ಗೊತ್ತಿರದಿದ್ದರೆ, ಆತನ ವಿಳಾಸವೂ ಸಹ ಸರಿಯಾಗಿರುವುದಿಲ್ಲ. ಅಂದರೆ, ಮೊದಲು, ದೇವರು ಎಂದರೆ ಯಾರು ಎಂದು ವಿವೇಚಿಸಿ ಸರಿಯಾಗಿ ತಿಳಿದುಕೊಳ್ಳಬೇಕು. ನಂತರ, ಆತನ ಸರಿಯಾದ ವಿಳಾಸಕ್ಕೆ ತಲುಪಬಹುದು.

ನಿಜವಾದ ದೇವರು ಯಾರು ಎಂದು ತಿಳಿಯುವುದಕ್ಕೆ, ಮೊದಲು ಬಸವಣ್ಣನವರ ಕಾಲದಲ್ಲಿ, ಮತ್ತು ಈಗಲೂ ಸಹ ಪ್ರಚಲಿತದಲ್ಲಿರುವ ಕೆಲವು ಚಿತ್ರವಿಚಿತ್ರ ದೈವಗಳು ಮತ್ತು ಅವುಗಳ ಗುರುತು ಹೇಗಿದೆ ನೋಡಿ:

ಮಡಕೆ ದೈವ, ಮೊರ ದೈವ, ಬೀದಿಯ ಕಲ್ಲು ದೈವ, ಹಣಿಗೆ ದೈವ, ಬಿಲ್ಲನಾರಿ ದೈವ, ಕಾಣಿರೊ !
ಕೊಳಗ ದೈವ, ಗಿಣ್ಣಿಲು ದೈವ, ಕಾಣಿರೊ ! ದೈವ ದೈವವೆಂದು ಕಾಲಿಡಲಿಂಬಿಲ್ಲ,
ದೈವನೊಬ್ಬನೆ ಕೂಡಲಸಂಗಮದೇವ.

ಮಡಕೆ, ಮೊರ, ಬೀದಿಯ ಕಲ್ಲು, ಹಣಿಗೆ... ಇತ್ಯಾದಿ ಈ ತರಹದ ಚಿತ್ರವಿಚಿತ್ರ ದೈವಗಳ ವಿಳಾಸ ಎಲ್ಲಿದೆ ಗಮನಿಸಿ. ಈಗಲೂ ಸಹ ಬಸವಣ್ಣನವರು ಕಂಡಂತ ಈ ತರಹದ ವಿಚಿತ್ರ ದೈವಗಳ ವಿಳಾಸಗಳನ್ನು ನಾವು ಹಾಳು ಮೊರಡಿಗಳಲ್ಲಿ ಕಾಣಬಹುದು.

ಹಾಳು ಮೊರಡಿಗಳಲ್ಲಿ ಊರ ದಾರಿಗಳಲ್ಲಿ ಕೆರೆ ಬಾವಿ ಹೂಗಿಡು ಮರಂಗಳಲ್ಲಿ
ಗ್ರಾಮಮಧ್ಯಂಗಳಲ್ಲಿ ಜಲಪಥ ಪಟ್ಟಣಪ್ರವೇಶದಲ್ಲಿ ಹಿರಿಯಾಲದ ಮರದಲ್ಲಿ ಮನೆಯ ಮಾಡಿ,
ಕರೆವೆಮ್ಮೆಯ ಹಸುಗೂಸು ಬಸುರಿ ಬಾಣಂತಿ ಕುಮಾರಿ ಕೊಡಗೂಸು ಎಂಬವರ
ಹಿಡಿದುಂಬ ತಿರಿದುಂಬ ಮಾರಯ್ಯ ಬೀರಯ್ಯ ಕೇಚರಗಾವಿಲ ಅಂತರಬೆಂತರ
ಕಾಳಯ್ಯ ಮಾರಯ್ಯ ಮಾಳಯ್ಯ ಕೇತಯ್ಯಗಳೆಂಬ ನೂರು ಮಡಕೆಗೆ
ನಮ್ಮ ಕೂಡಲಸಂಗಮದೇವ ಶರಣೆಂಬುದೊಂದೆ ದಡಿ ಸಾಲದೆ.

ದೇವಸ್ಥಾನದಲ್ಲಿನ ದೇವರ ಮೂರ್ತಿಗಳು ಕಳ್ಳತನವಾದ ಸುದ್ದಿಯನ್ನು ನಾವು ಆಗಾಗ ಕೇಳ್ತಾ ಇರ್ತೇವೆ. ಅಂತಹ ಬೆಲೆ ಬಾಳುವ ಲೋಹದಿಂದ ಮಾಡಿದ ಮೂರ್ತಿಗಳು ಮನೆಯಲ್ಲಿದ್ದರೆ, ಕಳ್ಳರ ಭಯದಿಂದ ಆ ಮೂರ್ತಿಗಳನ್ನು ಬ್ಯಾಂಕ್ ಲಾಕರನಲ್ಲಿ ಇಡುವವರೂ ಇದ್ದಾರೆ. ಅವಶ್ಯಕತೆ ಬಿದ್ದರೆ ಬೆಲೆಬಾಳುವ ದೈವದ ಮೂರ್ತಿಗಳನ್ನು ಮಾರುವವರೂ ಇದ್ದಾರೆ.

ಅದೇ ಲೋಹದ ಮೂರ್ತಿಗಳನ್ನು ಕರಗಿಸಿ ಮತ್ತೊಂದು ದೈವದ ಮೂರ್ತಿಯನ್ನೊ ಅಥವಾ ಸುಂದರ ಕಲಾಕೃತಿಗಳನ್ನೊ ಮಾಡಿ ಮಾರುವವರು ಇದ್ದಾರೆ. ಹಾಗಾದರೆ, ಈ ತರಹದ ಮೂರ್ತಿಗಳನ್ನು ದೇವರು ಎನ್ನುವುದು ಸರಿಯಲ್ಲವೆಂಬುದು ಗುರು ಬಸವಣ್ಣನವರ ಅಭಿಪ್ರಾಯ.

ಅರಗು ತಿಂದು ಕರಗುವ ದೈವವನೆಂತು ಸರಿಯೆಂಬೆನಯ್ಯಾ
ಉರಿಯ ಕಂಡಡೆ ಮುರುಟುವ ದೈವವನೆಂತು ಸರಿಯೆಂಬೆನಯ್ಯಾ
ಅವಸರ ಬಂದಡೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ
ಅಂಜಿಕೆಯಾದಡೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ
ಸಹಜಭಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೆ ದೇವ.

ಯಾವುದು ಸರಿಯಲ್ಲಮೋ ಅದು ದೇವರಾಗಲು ಸಾಧ್ಯವೇ ಇಲ್ಲ. ಮತ್ತು ಕೆಲವು ಸಲ ಈ ದೈವಗಳ ನಡತೆ ಹೇಗಿರುತ್ತದೆಂದರೆ, ಇವುಗಳು ದೈವಂಗಳೊ ಇಲ್ಲ ದೆವ್ವಂಗಳೊ ಎನ್ನುವ ಅನುಮಾನ ಬರುತ್ತದೆ!

ಆಗಳೊ ಲೋಗರ ಮನೆಯ ಬಾಗಿಲ
ಕಾಯ್ದುಕೊಂಡಿಪ್ಪವು ಕೆಲವು ದೈವಂಗಳು
ಹೋಗೆಂದಡೆ ಹೋಗವು ಕೆಲವು ದೈವಂಗಳು
ನಾಯಿಗಿಂತ ಕರಕಷ್ಟ ಕೆಲವು ದೈವಂಗಳು
ತಾವೇನ ಕೊಡುವವು ಕೂಡಲ ಸಂಗಮದೇವ

ಈ ತರಹದ ದೈವಂಗಳು ಭೂತಾರಾಧನೆ ಹೆಸರಿನಲ್ಲಿ ಇಂದಿಗೂ ತುಳುನಾಡಿನ ಸಂಸ್ಕೃತಿಯಲ್ಲಿ ಹಾಸು ಹೊಕ್ಕಾಗಿವೆ. ಈ ಭಾಗದ ಜನರಿಗೆ ಭೂತಂಗಳೂ ದೈವಂಗಳೆ. ಕರ್ನಾಟಕದ ಒಬ್ಬ ಮಾಜಿ ಮುಖ್ಯಮಂತ್ರಿಗಳಂತೂ ಈ ಭೂತಾರಾಧನೆಯನ್ನೆ ದೆಹಲಿಯ ಗಣರಾಜ್ಯೋತ್ಸವದ ಪರೇಡ್ ನಲ್ಲಿ ಕರ್ನಾಟಕದ ಘನ ಸಂಸ್ಕೃತಿಯೆಂಬಂತೆ ಪ್ರತಿಬಿಂಬಿಸಿ ನಗುನಗುತ್ತಲೇ ಮೌಢ್ಯತೆಯನ್ನು ಮೆರೆದಿದ್ದರು.

ಮಾರಿ, ಮಸಣಿಯಂಥ ಕೆಲವು ಕ್ಷುದ್ರ ದೈವಗಳನ್ನು ಗಮನಿಸುವುದಾದರೆ,
ಮಾರಿಕಣ್ಣು ಕೋಣದ ಮ್ಯಾಲೆ ಅನ್ನುವ ಹಾಗೆ ಕೆಲವು ದೈವಂಗಳು ಬಲಿ ಕೊಡುವ, ಕೇವಲ ಉಣಲು ಉಡಲು ಮತ್ತು, ಮೌಢ್ಯತೆ ಬೆಳೆಸುವ ಜಾತ್ರೆ ಮಾಡಲು ಮಾತ್ರ. ಇದಕ್ಕೆ ಪ್ರಸಿದ್ಧ ಶಿರಸಿ ಮಾರಿಕಾಂಬೆ ಜಾತ್ರೆ ಒಂದು ಉದಾಹರಣೆ.

ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೇ?
ತನ್ನ ಮಗನ ಜವನೊಯ್ದಲ್ಲಿ ಅಂದೆತ್ತೆ ಹೋದಳಾ ಮಾರಿಕವ್ವೆ?
ಈವಡೆ ಕಾವಡೆ ನಮ್ಮ ಕೂಡಲಸಂಗಯ್ಯನಲ್ಲದೆ ಮತ್ತೊಂದು ದೈವವಿಲ್ಲ

ಉತ್ತರ ಕರ್ನಾಟಕದಲ್ಲಿ ಜೋಕುಮಾರ ಸ್ವಾಮಿಯ ಕಥೆ ಜಾನಪದ ಕಥೆ ಪ್ರಚಲಿತದಲ್ಲಿದೆ.
ಜೋಕುಮಾರನು ಒಬ್ಬ ದೇವತೆಯ ಮಗನು, ಅಂದರೆ ಮಾರಿಯ ಮಗನು, ಅಲ್ಪಾಯುಷಿಯಾಗಿ, ಏಳು ದಿನಗಳಲ್ಲಿ ಮೆರೆದು ಪುಂಡಾಟಿಕೆ ಮಾಡಿ ತೀರಿ ಹೋದ ಜಾನಪದ ಸಂಪ್ರದಾಯದ ದೇವತೆಯಾಗಿದ್ದಾನೆ. ಅವನ ತಾಯಿ ಮಾರಿಕವ್ವೆ, ದೇವತಾ ಸ್ತ್ರೀ ಇದ್ದರೂ ಸಹ ಅವನನ್ನು ಕಾಪಾಡದೆ ಹೋದಳೆಂದ, ಅವಳು ಬೇರೆಯವರನ್ನೇನು ರಕ್ಷಿಸಲು, ಕಾಯಲು ಸಾಧ್ಯ?

ಇನ್ನು ದಕ್ಷಿಣ ಕರ್ನಾಟಕದಲ್ಲಿಯ ಮಾರಿಕಾಂಬೆ ಕಥೆ ಸ್ವಲ್ಪ ಭಿನ್ನ. ಈ ಕಥೆಗಳೆಲ್ಲವೂ ಮೌಢ್ಯತೆಯ ಪರಮಾವಧಿಯಂತೆ ಕಾಣುತ್ತವೆ. ಅವೆಲ್ಲವನ್ನೂ ಗೂಗಲ್ ನಲ್ಲಿ ಹುಡುಕಿ ಓದಬಹುದು. ಈ ದೇವತೆಗಳು ಬೆಂಗಳೂರಿನಂತಹ ಮೌಢ್ಯತೆಯ ರಾಜಧಾನಿಯಲ್ಲಿ ಎಷ್ಟು ಪ್ರಸಿದ್ಧ ಎಂದರೆ ಅವರ ಹೆಸರಲ್ಲಿ ಸರ್ಕಲ್ ಗಳೂ ಉಂಟು ಅಲ್ಲದೆ ಆ ದೇವತೆಗಳೆ ಸರ್ಕಲ್ ಗಳಾಗುತ್ತವೆ, ಉದಾಹರಣೆಗೆ ಸರ್ಕಲ್ ಮಾರಮ್ಮ.
ಏಡ್ಸಮ್ಮನಿಗೆ ಈಗಾಗಲೇ ಗುಡಿ ಕಟ್ಟಲಾಗಿದೆ, ಮುಂದೆ ಕೊರೋನಮ್ಮನಿಗೆ ಗುಡಿ ಕಟ್ಟಲು ನಮ್ಮ ಜನ ಈಗಾಗಲೇ ಸಿದ್ಧವಾಗಿದ್ದಾರೆ.

ಪಂಚಭೂತಗಳಲ್ಲೊಂದಾದ ಅಗ್ನಿಯನ್ನು ದೈವವೆಂದು ನಂಬಿ ಹವಿಯನಿಕ್ಕುವ ಹಾರುವ ತನ್ನ ಮನೆಗೆ ಬೆಂಕಿ ಬಿದ್ದಾಗ ದೈವವೆಂದು ನಂಬಿದ ಅಗ್ನಿಯ ಮೇಲೆ ಬಚ್ಚಲ ನೀರು ಬೀದಿಯ ದೂಳನ್ನು ಹಾಕುವುದು ಆತನ ಇಬ್ಬಗೆಯ ನೀತಿ.

ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು
ಕಿಚ್ಚೆದ್ದು ಸುಡುವಾಗ ಬಚ್ಚಲ ನೀರ, ಬೀದಿಯ ದೂಳ ಹೊಯ್ದು
ಬೊಬ್ಬಿಟ್ಟೆಲ್ಲರ ಕರೆವರಯ್ಯಾ. ಕೂಡಲಸಂಗಮದೇವಾ,
ವಂದನೆಯ ಮರೆದು ನಿಂದಿಸುತ್ತಿದ್ದರು.

ಅಗ್ನಿಯನ್ನು ದೈವವೆಂದು ನಂಬಿದುದು ಯಾವ ಆಧಾರದ ಮೇಲೆ? ಅಗ್ನಿ ಒಳ್ಳೆಯದನ್ನೂ ಸುಡುತ್ತದೆ, ಕೆಟ್ಟದ್ದನ್ನೂ ಸುಡುತ್ತದೆ. ಅಗ್ನಿಗೆ ತನ್ನ ಅಸ್ತಿತ್ವ ಅಥವಾ ತಾನೇನು ಮಾಡುತ್ತಿದ್ದೇನೆ ಎಂಬ ಅರಿವಿರುವುದಿಲ್ಲ, ಏಕೆಂದರೆ ಇತರ ಪಂಚಭೂತಗಳಾದ ಪೃಥ್ವಿ, ಜಲ, ವಾಯು, ಆಕಾಶದಂತೆ ಅಗ್ನಿಯೂ ಸಹ ಸ್ಥಾವರ.
ಪಂಚಭೂತಗಳೆಲ್ಲವೂ ಸ್ಥಾವರವಾದುದರಿಂದ, ಪಂಚಭೂತಗಳಿಂದ ಮಾಡಿದ ಮೂರ್ತಿಗಳೂ, ಆ ಮೂರ್ತಿಗಳು ಇರುವ ಕ್ಷೇತ್ರಗಳು, ಎಲ್ಲವೂ ಸ್ಥಾವರ. ಸ್ಥಾವರಕ್ಕಳಿವುಂಟು ಜಂಗಮಕ್ಕಳಿವಿಲ್ಲ.

ಇನ್ನು ಐತಿಹಾಸಿಕಪೌರಾಣಿಕ ಇಂದ್ರ, ಬ್ರಹ್ಮ, ರಾಮ, ಕೃಷ್ಣ, ದೇವರೆ? ಬಸವಣ್ಣನವರ ಈ ವಚನ ಗಮನಿಸಿ:

ಅಮೃತಮತಿ ಸೋಮಶಂಭುವಿಂಗೆ ಹುಟ್ಟಿದಾತನು ಇಂದ್ರ
ಸತ್ಯಋಷಿ ಜೇಷ್ಠಾದೇವಿಗೆ ಹುಟ್ಟಿದಾತನು ಬ್ರಹ್ಮ.
ವಸುದೇವ ದೇವಕಿಗೆ ಹುಟ್ಟಿದಾತನು ಕೃಷ್ಣ.
ನಾಭಿರಾಜ ಮರುತಾದೇವಿಗೆ ಹುಟ್ಟಿದಾತನು ಅರುಹ
ಇವರೆಲ್ಲರು ಯೋನಿಜರೆಂಬುದ ತ್ರೈಜಗ ಬಲ್ಲುದು.
ಉತ್ಪತ್ತಿ ಸ್ಥಿತಿ ಪ್ರಳಯಕ್ಕೆ ಹೊರಗಾದ ಕೂಡಲಸಂಗಮದೇವಂಗೆ
ಮಾತಾಪಿತರುಗಳುಂಟೆ ಹೇಳಿರೊ !

ಮನುಷ್ಯ ರೂಪದಲ್ಲಿರುವ ಐತಿಹಾಸಿಕಪೌರಾಣಿಕ ಚಿತ್ರಣಗಳು ತಂದೆತಾಯಿಗಳಿಂದ ಹುಟ್ಟಿದವರಾದ್ದರಿಂದ ಅವರು ದೇವರಲ್ಲ. ಉತ್ಪತ್ತಿಸ್ಥಿತಿಪ್ರಳಯಕ್ಕೆ ಒಳಗಾದ ಪೌರಾಣಿಕ, ಕಾಲ್ಪನಿಕ, ಐತಿಹಾಸಿಕ ವ್ಯಕ್ತಿಗಳು ದೇವರಲ್ಲವೆಂದು ಬಸವಣ್ಣನವರು ಸ್ಪಷ್ಟಪಡಿಸುತ್ತಾರೆ.
ಕಾಲ್ಪನಿಕವಾಗಿ, ಬರೆದ ಪುರಾಣಗಳಲ್ಲಿ ಬರುವ ಇಂದ್ರ, ಇಂದ್ರಲೋಕ, ಸ್ವರ್ಗ, ಅಸುರರು ಇವೆಲ್ಲವೂ ಸಾಂಕೇತಿಕ. ಮಾನವನ ದಶ ಇಂದ್ರಿಯಗಳ ರಾಜ (ಇಂದ್ರ) ಮನಸ್ಸು. ಆ ಮನಸ್ಸಿನ ಲೋಕವೇ ಇಂದ್ರಲೋಕ.

ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯಗಳು ಮನಸ್ಸು ಎಂಬ ರಾಜನ ಆಜ್ಞೆಯನ್ನು ಶಿರಸಾ ಪಾಲಿಸುತ್ತವೆ. ಮನಸ್ಸೆಂಬ ಇಂದ್ರ ಪಂಚತನ್ಮಾತ್ರಯಗಳೆಂಬ (ಶಬ್ದ, ಸ್ಪರ್ಶ..) ವಿಷಯಗಳ ಹಿಂದೆ ಹರಿದು ಭವಬಂಧಿತವಾಗಿ, ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖಗಳನ್ನು ಅನುಭವಿಸುತ್ತದೆ. ಇಂತಹ ಮರೆವಿನಲ್ಲಿರುವ ಮನಸ್ಸಿಗೆ ನಾನುನನ್ನದೆಂಬ ಅಹಂಕಾರ ಮಮಕಾರಗಳೇ ಅಸುರರಾಗಿ ಕಾಡುತ್ತವೆ. ಇದನ್ನೇ ಸಾಂಕೇತಿಕವಾಗಿ ಇಂದ್ರನೆಂಬ ರಾಜ, ಸುಖವೆಂಬ ಸ್ವರ್ಗಲೋಕದಲ್ಲಿ ಇದ್ದರೂ ಅಜ್ಞಾನವಶದಿಂದ ಅಸುರರ ದಾಳಿಗೆ ಒಳಗಾಗಿ ದುಃಖವನ್ನು ಅನುಭವಿಸುತ್ತಾನೆ. ತನ್ನತಾನರಿಯುವದರಲ್ಲಿ ವಿಫಲನಾದ ಇಂದ್ರ, ಭವ ಬಂಧಿತನಾಗುತ್ತಾನೆ, ಕಷ್ಟನಷ್ಟಗಳನ್ನು ಅನುಭವಿಸುತ್ತಾನೆ. ಇದಕ್ಕೆ ಪರಿಹಾರರೂಪದಲ್ಲಿ ಕೊನೆಗೆ ಅವನು ಗುರುವಿನ (ನಾರದ, ಬ್ರಹಸ್ಪತಿ) ಮೊರೆ ಹೋಗುತ್ತಾನೆ. ಆ ಗುರುಗಳೆಲ್ಲರೂ ದೇವನ ಮೊರೆ ಹೋಗುವಂತೆ ಸೂಚಿಸುತ್ತಾರೆ. ಇಂದ್ರಚಂದ್ರರ ಗುರುಗಳೆಲ್ಲರೂ ತ್ರಿಮೂರ್ತಿಗಳ ಆರಾಧನೆ ಸೂಚಿಸುತ್ತಾರೆ....
ಆದರೆ ಅವರಾರೂ ಬಸವಗುರುವಿನ ಹಾಗೆ ತನ್ನತಾನರಿಯುವ ಇಷ್ಟಲಿಂಗದ ತ್ರಾಟಕ ಯೋಗದ ಸರಳ ಮಾರ್ಗವನ್ನು ಯಾವ ದೇವಗುರುಗಳೂ ತಿಳಿಸುವದಿಲ್ಲ.
ಇದೇನು, ನಾವು ನಂಬಿದ ರಾಮ ಕೃಷ್ಣ, ಇಂದ್ರ, ಬ್ರಹ್ಮ ಇವರೆಲ್ಲರನ್ನು ಬಸವಣ್ಣನವರು ದೇವರಲ್ಲವೆಂದರಲ್ಲ!?. ಹಿಂದೂ ಧರ್ಮದಲ್ಲಿ ಅವರನ್ನು ನಾವು ದೇವರೆಂದು ನಂಬಿದ್ದೇವೆ, ನಮ್ಮ ನಂಬಿಕೆಯನ್ನು ಅಲ್ಲಗಳೆಯಲು ಬಸವಣ್ಣನವರು ಯಾರು ಎಂದು ಹಿಂದೂ ಧರ್ಮೀಯರಿಗೆ ಅನ್ನಿಸಬಹುದು.
ಹಾಗಾದರೆ, ಹಿಂದೂ ಧರ್ಮದ ಪುನರುದ್ಧಾರಕರೆಂದೇ ಖ್ಯಾತಿವೆತ್ತ ಶಂಕರಾಚಾರ್ಯರೂ ಸಹ ಮನೋಬುಧ್ಯಹಂಕಾರಚಿತ್ತಾನಿನಾಹಂ ಎಂಬ ನಿರ್ವಾಣಷಟ್ಕಮ್ ನಲ್ಲಿ, ದೇವರಿಗೆ ತಂದೆ ತಾಯಿಗಳಿಲ್ಲ, ಆತನಿಗೆ ಹುಟ್ಟಿಲ್ಲ, ಸಾವಿಲ್ಲ, ಜಾತಿ ಭೇದವಿಲ್ಲ ಮತ್ತು ಚಿದಾನಂದರೂಪಿ ಶಿವನೆ ನನ್ನ ಸ್ವರೂಪ ಎಂದು ಹೇಳುತ್ತಾರೆ, ಗಮನಿಸಿ,

ನ ಮೇ ಮೃತ್ಯುಶಂಕಾ ನ ಮೇ ಜಾತಿಭೇದಃ
ಪಿತಾ ನೈವ ಮೇ ನೈವ ಮಾತಾ ನ ಜನ್ಮ ।
ನ ಬಂಧುರ್ನ ಮಿತ್ರಂ ಗುರುರ್ನೈವ ಶಿಷ್ಯಃ
ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥ 5 ॥

ಆದಿಗುರು ಶಂಕರಾಚಾರ್ಯರ ಮಾತುಗಳನ್ನು ಒಪ್ಪದವರು ಒಬ್ಬ ಒಳ್ಳೆಯ ಹಿಂದೂ ಆಗಿರಲು ಸಾಧ್ಯವೆ? ಹಾಗಾಗಿ ಶಂಕರಾಚಾರ್ಯರ ಮಾತುಗಳನ್ನು ಹೇಗೆ ಒಪ್ಪುತ್ತೇವೆಯೋ ಅದೇ ರೀತಿ, ಶ್ರೀಗುರು ಬಸವಣ್ಣನವರ ಮಾತುಗಳನ್ನೂ ಸಹ ಒಪ್ಪಲೇ ಬೇಕಾಗುತ್ತದೆ, ಏಕೆಂದರೆ, ಈ ವಿಷಯದಲ್ಲಿ ಇಬ್ಬರೂ ಹೇಳುತ್ತಿರುವುದು ಒಂದೇ ಮಾತನ್ನು.

ಯಾವ ಮಾನದಂಡಗಳು ಇಂದ್ರ, ಬ್ರಹ್ಮ, ಕೃಷ್ಣ, ಅರುಹನಿಗೆ ಉಪಯೋಗಿಸಿ ಅವರೆಲ್ಲರೂ ದೇವರಲ್ಲವೆಂದು ತೀರ್ಮಾನಿಸಿದೆವೆಯೊ, ಅದೇ ಮಾನದಂಡಗಳ ಪ್ರಕಾರ ಯೋಗಿ ಶಿವ, ಪೌರಾಣಿಕ ಶಿವ, ಇವರೂ ಸಹ ದೇವರಲ್ಲ. ಪೌರಾಣಿಕರ ದ್ವೈತ ಕಲ್ಪನೆಯಾದ ಕೈಲಾಸ ಹೊರಗಡೆ ಇಲ್ಲ. ಚಿತ್ತ ಶುದ್ಧ ವಾದ ಕಾಯವೇ ಕೈಲಾಸ.

ಭಕ್ತಿಯೆಂಬ ಪಿತ್ತ ನೆತ್ತಿಗೇರಿ ಕೈಲಾಸದ ಬಟ್ಟೆಯ ಹತ್ತುವ ವ್ಯರ್ಥರ ಕಂಡು
ಎನ್ನ ಮನ ನಾಚಿತ್ತು, ನಾಚಿತ್ತು.
ಕೈಲಾಸವೆಂಬುದೇನೊ, ಪೃಥ್ವಿಯ ಮೇಲೊಂದು ಮೊರಡಿ,
ಆ ಪೃಥ್ವಿಗೆ ಲಯವುಂಟು, ಆ ಮೊರಡಿಗೆಯು ಲಯವುಂಟು,
ಅಲ್ಲಿರ್ಪ ಗಂಗೆವಾಳುಕಸಮರುದ್ರರಿಗೂ ಲಯವುಂಟು,

ಇದು ಕಾರಣ,
'ಯದ್ದೃಷ್ಟಂ ತನ್ನಷ್ಟಂ' ಎಂಬ ಶ್ರುತಿಯ ನೋಡಿ ತಿಳಿದು,
ಬಟ್ಟಬಯಲು ತುಟ್ಟತುದಿಯ ಮೆಟ್ಟಿನಿಂದ
ಕೂಡಲಸಂಗಾ, ನಿಮ್ಮ ಶರಣ.

ಬಸವಪಥದಲ್ಲಿಯೇ ನಡೆದ ಸಿದ್ಧರಾಮೇಶ್ವರರು ಕೈಲಾಸವೆಂಬುದು ಲಿಂಗಾಂಗ ಸಾಮರಸ್ಯವೆನ್ನುತ್ತಾರೆ.

ಕೈಲಾಸ ಕೈಲಾಸವೆಂದು ಬಡಿದಾಡುವ ಅಣ್ಣಗಳಿರಾ, ಕೇಳಿರಯ್ಯಾ.
ಕೈಲಾಸವೆಂಬುದೊಂದು ಭೂಮಿಯೊಳಿರುವ ಹಾಳು ಬೆಟ್ಟ.
ಅಲ್ಲಿರುವ ಮುನಿಗಳೆಲ್ಲ ಜೀವಗಳ್ಳರು. ಅಲ್ಲಿರ್ದ ಚಂದ್ರಶೇಖರನು ಬಹು ಎಡ್ಡ.
ಇದರಾಡಂಬರವೇಕಯ್ಯಾ? ಎಮ್ಮ ಪುರಾತರಿಗೆ ಸದಾಚಾರದಿಂದ ವರ್ತಿಸಿ, ಲಿಂಗಾಂಗ ಸಾಮರಸ್ಯವ ತಿಳಿದು, ನಿಮ್ಮ
ಪಾದಪದ್ಮದೊಳು ಬಯಲಾದ ಪದವೆ ಕೈಲಾಸವಯ್ಯಾ,
ಕಪಿಲಸಿದ್ಧಮಲ್ಲಿಕಾರ್ಜುನಾ.

ಪೌರಾಣಿಕ ಕಲ್ಪನೆಯ ಶಿವನ ಚಿತ್ರಣವನ್ನು ಅಲ್ಲಮ ಪ್ರಭುದೇವರು ನಿರಾಕರಿಸುತ್ತಾರೆ.

ತ್ರಿಪುರವನುರುಹಿದ ತ್ರಿನೇತ್ರನಲ್ಲ, ಅಂಧಕಾಸುರನ ಮೆಟ್ಟಿ ನಾಟ್ಯವನಾಡಿದಾತನಲ್ಲ,
ಖಂಡಕಪಾಲಿಯಲ್ಲ ಮುಂಡಧಾರಿಯಲ್ಲ, ಭೂಮಂಡಲದೊಳಗೆ ಬಂದು ಸುಳಿವಾತನಲ್ಲ,
ಈಶ್ವರನಲ್ಲ ಮಹೇಶ್ವರನಲ್ಲ, ಗುಹೇಶ್ವರನೆಂಬ ಲಿಂಗ ಅಪಾರ ಮಹಿಮನು.

ಶಿವತತ್ವವನ್ನು ಪೌರಾಣಿಕ ಕಲ್ಪನೆಯಲ್ಲಿ ಚಿತ್ರಿಸಿದ ಪುರಾಣಗಳೂ ಸಹ ಮೂರ್ತಿಗೊಳಗಾದ ದೋಷಕ್ಕೊಳಗಾದವು.
ಅಲ್ಲಮ ಪ್ರಭುದೇವರು ಇದನ್ನು ಸ್ಪಷ್ಟಪಡಿಸುತ್ತಾರೆ.

ವಚನದ ರಚನೆಯೆಂಬ ಮಾತಿನ ಬಣ್ಣದ ಪರಿಯಲ್ಲ ನೋಡಾ.
ಹೊಗಳಿ ಕಂಡವರೆಲ್ಲರು ಮೂರ್ತಿಗೊಳಗಾದರು.
ವೇದ ಶಾಸ್ತ್ರ ಮಾರ್ಗವೆಲ್ಲವೂ ಹೊಗಳಿ ಕಾಣವೆಂಬುದ,
ಗುಹೇಶ್ವರ ಸಾಕ್ಷಿಯಾಗಿ ಮೂರುಲೋಕ ಬಲ್ಲುದು ಕಾಣಾ ಸಿದ್ಧರಾಮಯ್ಯಾ.

ಯೋಗಿ ಶಿವ, ಪೌರಾಣಿಕ ಶಿವ ಇವರೆಲ್ಲರಿಗೂ ಹೆಸರಿದೆ, ಏಕೆಂದರೆ, ಅವರು ಜನ್ಮವೆತ್ತಿದ್ದಾರೆ, ಹುಟ್ಟಿದ್ದಾರೆ, ಅಂದಮೇಲೆ ಸಾವು ಖಚಿತ. ನಿಜವಾದ ದೇವರಿಗೆ ತಂದೆತಾಯಿಗಳಿಲ್ಲ, ಹುಟ್ಟು ಸಾವುಗಳಿಲ್ಲ. ಹುಟ್ಟಿಲ್ಲವೆಂದರೆ, ಹೆಸರಿಡಲು ಬಾರದು. ಆದರೆ ಬಸವಣ್ಣನವರು, ಅಗಮ್ಯ ಅಗೋಚರ ದೇವರಿಗೆ ನಿರಾಕಾರ ರೂಪ ಕೊಟ್ಟು ನಿರಾಕಾರ ಅರಿವಿನ ಕುರುಹಾಗಿ ಕರಸ್ಥಲಕ್ಕೆ ಕೊಡುತ್ತಾರೆ.

ಹೆಸರಿಡಬಾರದ ಘನತರ ಲಿಂಗವ ಹೆಸರಿಟ್ಟು, ವಾಙ್ಮನಕ್ಕಗೋಚರವಪ್ಪ ಲಿಂಗವ ವಾಕ್ಯಕ್ಕೆ ತಂದು,
'ಅತ್ಯತಿಷ್ಠದ್ದಶಾಂಗುಲಂ' ಎಂಬ ಲಿಂಗವ ಚಿತ್ತಕ್ಕೆ ತಂದು, ಸುತ್ತಿರ್ದ ಮಾಯಾಪ್ರಪಂಚವ ಬಿಡಿಸಿದ ಬಸವಣ್ಣ;
ಚಿತ್ತಶುದ್ಧನ ಮಾಡಿದ ಬಸವಣ್ಣ. ಮಲತ್ರಯಂಗಳ ಹರಿದು, ಶುದ್ಧ ತಾತ್ಪರ್ಯವರುಹಿ,

ಮುಕ್ತನ ಮಾಡಿದ ಗುರು ಬಸವಣ್ಣ. ಕಪಿಲಸಿದ್ಧಮಲ್ಲಿಕಾರ್ಜುನಯ್ಯನೆನ್ನ ಕಾರಣ ಧರೆಗೆ ಬಂದ.

ಹಾಗಾಗಿ, ಬಸವಾದಿ ಶರಣರು ತನ್ನ ತಾನರಿದ ತತ್ವ ಸ್ವರೂಪಕ್ಕೆ ಶಿವತತ್ವ, ಲಿಂಗತತ್ವವೆಂದು ಕರೆದರು. ಹೊರಗಡೆ ಎಲ್ಲೋ ಕೈಲಾಸಗಿರಿಯಲ್ಲಿರುವ ಶಿವನನ್ನು ತಿರಸ್ಕರಿಸಿದರು. ಪರಿಶುದ್ಧವಾದ ಕಾಯವನ್ನೇ ಕೈಲಾಸವೆಂದು ಅರಿತು ಕಾಯದಲ್ಲಿಯೇ ಶಿವತತ್ವವನ್ನು ಕಂಡರು .ಆ ಶಿವತತ್ವದ ಅರಿವಿನ ನುಡಿಯೇ ಗುರು. ಆ ಅರಿವಿನ ನಡೆಯೇ ಲಿಂಗ, ಅರಿವಿನಿಂದೊಡಗೂಡಿದ ನಡೆನುಡಿಯ ನಿರಂತರತೆಯೇ ಜಂಗಮ ಸಾಧನೆ.
ಮೆರೆಮಿಂಡದೇವರ ವಚನ ಗಮನಿಸಿ:

ತನ್ನ ತಾನರಿದಡೆ, ತನ್ನರಿವೆ ಗುರು, ತಾನೆ ಲಿಂಗ, ತನ್ನ ನಿಷ್ಠೆಯೇ ಜಂಗಮ.
ಇಂತೀ ತ್ರಿವಿಧವು ಒಂದಾದಡೆ, ಐಘಟದೂರ ರಾಮೇಶ್ವರಲಿಂಗವು ತಾನೆ.

ಮರೆವಿನ ಮಾನವ ಮಲತ್ರಯಂಗಳ ಹರಿದು, ಶುದ್ಧ ತಾತ್ಪರ್ಯವನರಿದು, ಚಿತ್ತ ಶುದ್ಧಿಯಾಗಿ ಕನ್ನಡಿಯಂತಾದಾಗ, ಆ ಕನ್ನಡಿಯಲ್ಲಿ ಆತನಿಗೆ ತನ್ನ ನಿರಾಕಾರ ಚೇತನ ಸ್ವರೂಪ ದರ್ಶನವಾಗಿ, ತನ್ನತಾನರಿದು ಅರಿವುಳ್ಳ ಶರಣನಾಗುತ್ತಾನೆ.

ಉಂಬ ಬಟ್ಟಲು ಬೇರೆ ಕಂಚಲ್ಲ, ನೋಡುವ ದರ್ಪಣ ಬೇರೆ ಕಂಚಲ್ಲ,
ಭಾಂಡ ಒಂದೆ ಭಾಜನ ಒಂದೆ, ಬೆಳಗೆ ಕನ್ನಡಿಯೆನಿಸಿತ್ತಯ್ಯಾ.
ಅರಿದಡೆ ಶರಣ, ಮರೆದಡೆ ಮಾನವ, ಮರೆಯದೆ ಪೂಜಿಸು ಕೂಡಲಸಂಗನ.

ಸರ್ವಾಂತರ್ಯಾಮಿಯಾದ ನಿರಾಕಾರ ಚೇತನಕ್ಕೆ ಚಲನೆಯಿಲ್ಲ, ಆದ್ದರಿಂದ ಅದು ಸ್ಥಾವರ. ಆ ನಿರಾಕಾರ, ಸರ್ವಾಂತರ್ಯಾಮಿ ಚೇತನದ ಕುರುಹೇ ಸ್ಥಾವರ ಲಿಂಗ. ಸ್ಥಾವರಲಿಂಗದ ಪೂಜೆಯಿಂದ ಅರಿವಿನ ಸಾಧನೆಯಾಗುವುದಿಲ್ಲ, ಆದ್ದರಿಂದ, ಬಸವ ಧರ್ಮದಲ್ಲಿ ಸ್ಥಾವರಲಿಂಗದ ಪೂಜೆ ನಿಶಿದ್ಧ.
ಸ್ಥಾವರಲಿಂಗ ಪೂಜೆ ಮಾಡುವವರನ್ನು ' ಕೆಮ್ಮನೆ ಉಪಚಾರಕ್ಕೆ ಮಾಡುವವರು ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ' ಎಂದು ಅಲ್ಲಗಳೆದಿದ್ದಾರೆ.

ಬಸವಣ್ಣನವರಿಗಿಂತಲೂ ಹಿಂದೆ, ಕೆಲವು ಶುದ್ಧ ಶೈವರು ಪ್ರಯಾಣಕ್ಕೆ ಹೋದಾಗ ಪೂಜಿಸಲು ಇರಲಿ ಎಂದು ಸ್ಥಾವರಲಿಂಗದ ಚಿಕ್ಕರೂಪದ ಲಿಂಗಗಳನ್ನು ಮಾಡಿ ಜನಿವಾರಕ್ಕೆ ಕಟ್ಟಿಕೊಳ್ಳುತ್ತಿದ್ದರು. ಶುದ್ಧಶೈವರು, ಆ ಚಿಕ್ಕ ಲಿಂಗಗಳನ್ನು ಇಷ್ಟಲಿಂಗವೆಂದೂ ಕರೆಯುತ್ತಿದ್ದರು. ಆದರೆ, ಅವರ ಇಷ್ಟಲಿಂಗವು ಸ್ಥಾವರಲಿಂಗದ ಚಿಕ್ಕರೂಪವಾದುದರಿಂದ, ಸ್ಥಾವರಲಿಂಗದ ಹಾಗೆಯೆ ಅಷ್ಟವಿಧಾರ್ಚನೆ, ಶೋಡಶೋಪಚಾರ ಮಾಡುತ್ತಿದ್ದರು. ಆದರೆ ಬಸವಣ್ಣನವರು ಮಾಡಿದ ಹಾಗೆ ನೋಟದ ಭಕ್ತಿ ಮಾಡುತ್ತಿರಲಿಲ್ಲ, ಏಕೆಂದರೆ, ಅವರಿಗೆ ನೋಟದ ಭಕ್ತಿ ಏನೆಂದು ಗೊತ್ತೇ ಇರಲಿಲ್ಲ. ಅವರು ಇಷ್ಟಲಿಂಗಧಾರಿಗಳಾಗಿದ್ದರೂ ಸಹ ಅವರಿಗೆ ನೋಟದ ಭಕ್ತಿ ಗೊತ್ತಿರಲಿಲ್ಲವೆಂಬುದು ಗಮನಾರ್ಹ.

ಇಷ್ಟಲಿಂಗ ಪೂಜಕರೆಲ್ಲ ದೃಷ್ಟಲಿಂಗವನೆತ್ತ ಬಲ್ಲರೊ ?
ಜಂಗಮವೆ ಲಿಂಗವೆಂಬುದನು ಭವಭಾರಿಗಳೆತ್ತ ಬಲ್ಲರೊ ?
ಕೂಡಲಚೆನ್ನಸಂಗಯ್ಯನಲ್ಲಿ, ಮಹಾಪ್ರಸಾದಿ ಬಸವಣ್ಣ ಬಲ್ಲ

ಮೊಟ್ಟಮೊದಲಬಾರಿಗೆ ಗುರು ಬಸವಣ್ಣನವರು ಅರಿವು ಮತ್ತು ಕುರುಹನ್ನು ಒಂದು ಮಾಡಿ ದೃಷ್ಟಲಿಂಗವನ್ನು ಕೊಡುತ್ತಾರೆ. ಬಸವಣ್ಣನವರು ಕೊಟ್ಟ ದೃಷ್ಟಲಿಂಗ ಅರಿವುಳ್ಳ ಇಷ್ಟಲಿಂಗ.
ಚೆನ್ಮಯಜ್ಞಾನಿ ಚನ್ನಬಸವಣ್ಣನವರು ಇದನ್ನು ಗಮನಿಸಿ ಸ್ವರವಚನವೊಂದರಲ್ಲಿ
'ಅರಿವು ಕುರುಹನೆ ಅರಸಿ ಬರಲು ಆ ಕುರುಹು ಅರಿವನೊಳಗೊಂಡುದನು ಅರಿದ ಗುರುವೆ' ಎಂದು ವಚಿಸುತ್ತಾರೆ.

ಸಿದ್ಧರಾಮೇಶ್ವರರು ನೋಟದ ಭಕ್ತಿಯ ಮೂಲಕ ಕುರುಹಿವಿಡಿದು ಅರಿವಿನೆಡೆಗೆ ಸಾಗುವ ಸರಳ ಮಾರ್ಗದರ್ಶಕ ಗುರು ಬಸವಣ್ಣನವರೆಂದು ವಚಿಸುತ್ತಾರೆ.

ನೋಟದ ಭಕ್ತಿ ಬಸವನಿಂದಾಯಿತ್ತು; ಕೂಟದ ಜ್ಞಾನ ಬಸವನಿಂದಾಯಿತ್ತು ಕಾಣಾ.
ಎಲ್ಲಿಯ ಶಿವಜ್ಞಾನ ಎಲ್ಲಿಯ ಮಾಟಕೂಟ ಬಸವನಿಲ್ಲದೆ?
ಮಹಾಜ್ಞಾನ ಮಹಾಪ್ರಕಾಶ ಬಸವಣ್ಣನ ಧರ್ಮವಯ್ಯಾ, ಕಪಿಲಸಿದ್ಧಮಲ್ಲಿನಾಥಯ್ಯಾ.

ಬಸವ ಪ್ರಣೀತ ನೋಟದ ಭಕ್ತಿ, ತ್ರಿಮೂರ್ತಿಗಳ ಕಲ್ಪಿತವಲ್ಲದ ಭಕ್ತಿ.

ಅಜನ ಕಲ್ಪಿತವಲ್ಲದ ಭಕ್ತಿ, ವಿಷ್ಣುವಿನ ಕಲ್ಪಿತವಲ್ಲದ ಭಕ್ತಿ, ರುದ್ರನ ಕಲ್ಪಿತವಲ್ಲದ ಭಕ್ತಿ
ನಿನ್ನ ಕಲ್ಪಿತವಾಯಿತಯ್ಯ ಬಸವ. ನೋಟಕಾರರ ನೋಟಕೆ ಸಿಕ್ಕಿದಾ ಈ ಭಕ್ತಿ,
ಲಿಂಗಕೂಟಕೆ ಕೂಟವಾಯಿತಯ್ಯ ಬಸವ. ಈ ಬೇಟದ ಭಕ್ತಿಯ
ನಿಮ್ಮಿಂದ ಕಂಡೆನಯ್ಯ ಬಸವ ಗುರುವೇ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ.

ನಿರಾಕಾರ ಸ್ವರೂಪದ ಇಷ್ಟಲಿಂಗದ ದೃಷ್ಟಿಯೋಗ ನಮ್ಮ ನಿರಾಕಾರ ಸ್ವರೂಪದ ಅರಿವಿನ ದರ್ಶನ ಮಾಡಿಸುತ್ತದೆ.
ಸ್ಥಾವರಲಿಂಗ ಕೇವಲ ಪರಮಾತ್ಮನ ಕುರುಹಾದರೆ, ಇಷ್ಟಲಿಂಗ ಅರಿವುಕುರುಹಿನ ಸಂಗಮವಾದ ಸ್ವರೂಪ ದರ್ಶನ.
ಪರಮಾತ್ಮ ತತ್ವ (ಸಂಗಮದೇವ) ತನ್ನಲ್ಲಿಯೇ ಸಹಜವಾಗಿ ಕೂಡಿಕೊಂಡಿದುದನ್ನು (ಕೂಡಲ) ತನ್ನ ಅರಿವಿನಿಂದ ಕಂಡುಕೊಂಡಾಗ ಕೂಡಲಸಂಗಮದೇವ. ಗುರು ಬಸವಣ್ಣನವರ ಅರಿವಿನ ಪ್ರಜ್ಞೆಯೇ ಕೂಡಲಸಂಗಮ. ಅದು ಸ್ಥಾವರ ಲಿಂಗವಲ್ಲ. ಕೂಡಲ ಸಂಗಮದಲ್ಲಿರುವ ಸ್ಥಾವರಲಿಂಗದ ಹೆಸರು ಕಪ್ಪಡಿ ಸಂಗಮನಾಥ. ಕಪ್ಪಡಿ ಸಂಗಮನಾಥ ಅರಿವಿಲ್ಲದ ಕುರುಹು, ಆದರೆ, ಕೂಡಲಸಂಗಮದೇವ ಅರಿವಿನ ಕುರುಹು!
ಅದೇ ರೀತಿ, ಶ್ರೀಶೈಲದ ಮಲ್ಲಿಕಾರ್ಜುನ ಸ್ಥಾವರ ಲಿಂಗವಾದರೆ, ವಚನಾಂಕಿತಗಳಾದ ಚೆನ್ನಮಲ್ಲಿಕಾರ್ಜುನ, ಕಪಿಲಸಿದ್ಧ ಮಲ್ಲಿಕಾರ್ಜುನ, ನಿಃಕಳಂಕ ಮಲ್ಲಿಕಾರ್ಜುನ ಅರಿವಿನ ಕುರುಹುಗಳು. ಇದು, ಅರಿವು ಕುರುಹನು ಅರಸಿಬರಲು, ಆ ಕುರುಹು ಅರಿವನೊಳಗೊಂಡುದುದರ ಸಂಕೇತ.

ಬ್ರಹ್ಮಾಂಡದ ಚಲನಶೀಲತೆಗೆ ಕಾರಣವಾದ ಚೈತನ್ಯವೇ ಪಿಂಡಾಂಡದಲ್ಲೂ ಚೇತನವಾಗಿ ಕೂಡಿಕೊಂಡಿದೆ.
ಅದುವೇ ಜಂಗಮ. ಅದರ ಅರಿವೇ ಗುರು. ಆ ಸತ್ಯದ ಅರಿವಿನಲ್ಲಿ ಮಾಡುವ ಕ್ರಿಯಗಳೆಲ್ಲವೂ ಸದಾಚಾರ, ಆ ಸದಾಚಾರವೇ ಲಿಂಗ.
ಶಂಕರಾಚಾರ್ಯರೂ ಸಹ ನಿರ್ವಾಣಷಟಕಮ್ ನಲ್ಲಿ ಇದನ್ನೇ ಪ್ರತಿಧ್ವನಿಸುತ್ತಾರೆ.

ಅಹಂ ನಿರ್ವಿಕಲ್ಪೋ ನಿರಾಕಾರರೂಪೋ
ವಿಭುರ್ವ್ಯಾಪ್ಯ ಸರ್ವತ್ರ ಸರ್ವೇನ್ದ್ರಿಯಾಣಾಮ್ ।

ಸದಾ ಮೇ ಸಮತ್ವಂ ನ ಮುಕ್ತಿರ್ನ ಬನ್ಧಃ
ಚಿದಾನಂದರೂಪಃ ಶಿವೋऽಹಂ ಶಿವೋऽಹಮ್ ॥ 6 ॥

ಶಂಕರಾಚಾರ್ಯರ ಪ್ರಕಾರ, ನನ್ನ ಸ್ವರೂಪ ನಿರಾಕಾರ ಮತ್ತು ನಿರ್ವಿಕಲ್ಪ. ಸರ್ವವ್ಯಾಪಿಯಾದ ದೇವನು ಎಲ್ಲೆಡೆಯಲ್ಲಿಯೂ, ಮತ್ತು ಸರ್ವಪ್ರಾಣಿಗಳಲ್ಲಿಯೂ ಯಾವಾಗಲೂ ಕೂಡಿಕೊಂಡಿದ್ದಾನೆ. ಅರ್ಥಾತ್, ಸಹಜವಾಗಿ ಎಲ್ಲೆಡೆಯಲ್ಲಿ ಕೂಡಿಕೊಂಡು ಕೂಡಲಸಂಗಮವಾಗಿದ್ದಾನೆ.

ಆದರೆ ಒಂದು ಗಮನಾರ್ಹ ಅಂಶವೆಂದರೆ, ಬಸವಣ್ಣನವರಿಗೆ ಹೊಳೆದ ದೃಷ್ಟಿಲಿಂಗದ ಮಾರ್ಗ ಶಂಕರಾಚಾರ್ಯರಾದಿಯಾಗಿ ಯಾರಿಗೂ ಹೊಳೆಯಲಿಲ್ಲ. ಸತ್ಯವನ್ನು ನುಡಿದೂ ಸಹ, ಪಂಚಾಯತನ ಪೂಜೆಗೆ ಅನುವುಮಾಡಿಕೊಟ್ಟು, ಪೌರಾಣಿಕ ಶಿವ, ಪಾರ್ವತಿ, ವಿಷ್ಣು ವಿನ ಪೂಜೆಗೆ ಶಂಕರಾಚಾರ್ಯರು ಅನುವು ಮಾಡಿ ಕೊಟ್ಟರು. ದಯಾನಂದ ಸರಸ್ವತಿಯವರೂ ಸಹ ಶಂಕರಾಚಾರ್ಯರ ಈ ನಡೆಯನ್ನು ಖಂಡಿಸಿದ್ದಾರೆ. ಆದರೆ, ಮುಂದೆ ದಯಾನಂದ ಸರಸ್ವತಿಯವರೂ ಸಹ, ಕುರುಹಿಲ್ಲದೆ ಕೇವಲ ನಿರಾಕಾರವನ್ನು ಸಾಧಿಸಲು ಹೋಗಿ, ಬಳಲಿದರು. ಅವರಿಗೆ ಬಸವಣ್ಣನವರ ಹಾಗೆ ಅರಿವನೊಳಗೊಂಡ ನಿರಾಕಾರ ಕುರುಹಿನ ಇಷ್ಟಲಿಂಗ ಹೊಳೆಯಲಿಲ್ಲ. ಬಹುಶಃ, ದಯಾನಂದ ಸರಸ್ವತಿಯವರಿಗೆ, ಗುರು ಬಸವಣ್ಣನವರ ಇಷ್ಟಲಿಂಗದ ಬಗ್ಗೆ ತಿಳಿದಿದ್ದರೆ, ಅವರೂ ಸಹ ಇಷ್ಟಲಿಂಗವನ್ನು ಧರಿಸಿ ದೃಷ್ಟಲಿಂಗ ಯೋಗವನ್ನು ಮಾಡುತ್ತಿದ್ದರೆನಿಸದಿರದು.
ಗುರು ಬಸವಣ್ಣನವರು ತಮ್ಮ ಅರಿವಿನಿಂದ ಮನವನ್ನು ಘನಮನವನ್ನಾಗಿ ಸಾಧಸಿದರು. ಆ ಘನಮನದ ಮೂಲಕ ಗುರು ಲಿಂಗಜಂಗಮಪಾದೋದಕಪ್ರಸಾದ ಪಥವನ್ನು ಕಂಡುಕೊಂಡರು.

ಮುನ್ನಿನ ಜನ್ಮದಲ್ಲಿ ಗುರುಲಿಂಗಜಂಗಮವ ಪೂಜಿಸಲರಿಯದ
ಕಾರಣ ಬಹುಜನ್ಮಕ್ಕೆ ತಂದು ಇಕ್ಕಿದೆಯಯ್ಯಾ ಎನ್ನನು.
ಎನಗೆ ಗುರುಪಥವ ತೋರಿದವರಾರು, ಲಿಂಗಪಥವ ತೋರಿದವರಾರು
ಜಂಗಮಪಥವ ತೋರಿದವರಾರು, ಪಾದೋದಕ ಪ್ರಸಾದಪಥವ ತೋರಿದವರಾರು,
ತೋರುವ ಮನವೆ ನೀವೆಂದರಿತೆ. ಎನಗಿನ್ನಾವ ಭವವಿಲ್ಲ, ಕೂಡಲಸಂಗಮದೇವಾ.

ಅರಿವುಆಚಾರಅನುಭಾವಗಳ ಸಂಗಮವಾದ ಬಸವಣ್ಣನವರ ಕರಸ್ಥಲದಲ್ಲಿ ಗುರುಲಿಂಗಜಂಗಮಪ್ರಸಾದಸ್ಥಲ ಅಡಗಿದವು ಅಥವಾ ಕಂಡುಬಂದವು ಎಂದು ಅಲ್ಲಮ ಪ್ರಭುದೇವರು ಉದ್ಗರಿಸುತ್ತಾರೆ.

ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಸ್ಥಲ ಬಸವಣ್ಣನ ಕರಸ್ಥಲದೊಳಗೆ ಅಡಗಿತ್ತಲ್ಲ !
ಇನ್ನಾರಿಗೆ ಭಕ್ತಿಸ್ಥಲ, ಇನ್ನಾರಿಗೆ ಸಾರುವುದೀ ಲಿಂಗಸ್ಥಲ ?
ಗುಹೇಶ್ವರಾ ಸಂಗನಬಸವಣ್ಣನ ಮೊರೆಹೊಕ್ಕು ಬದುಕಿದೆನು.

ಅಲ್ಲಮ ಪ್ರಭುದೇವರು, ಚನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಮಡಿವಾಳ ಮಾಚಿದೇವರು ಮತ್ತು ಇನ್ನಿತರ ಅನೇಕ ಶರಣರು ಬಸವಣ್ಣನವರಿಂದಲೇ ಗುರು,ಲಿಂಗ, ಜಂಗಮತತ್ವಗಳು ಕೊಡಲ್ಪಟ್ಟವೆಂದು ಸ್ತುತಿಸುತ್ತಾರೆ.

ಎತ್ತೆತ್ತ ನೋಡಿದಡೆ ಅತ್ತತ್ತ ಬಸವನೆಂಬ ಬಳ್ಳಿ. ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು.
ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯಾ. ಆಯತ ಬಸವಣ್ಣನಿಂದ, ಸ್ವಾಯತ ಬಸವಣ್ಣನಿಂದ.

ಸನ್ನಹಿತವು ಬಸವಣ್ಣನಿಂದ, ಗುರು ಬಸವಣ್ಣನಿಂದ, ಲಿಂಗ ಬಸವಣ್ಣನಿಂದ. ಜಂಗಮ ಬಸವಣ್ಣನಿಂದ. ಪಾದೋದಕ ಬಸವಣ್ಣನಿಂದ, ಪ್ರಸಾದ ಬಸವಣ್ಣನಿಂದ. ಅತ್ತ ಬಲ್ಲಡೆ ನೀವು ಕೇಳಿರೆ, ಇತ್ತ ಬಲ್ಲಡೆ ನೀವು ಕೇಳಿರೆ. ಬಸವಾ ಬಸವಾ ಬಸವಾ ಎಂದು ಮಜ್ಜನಕ್ಕೆರೆಯದವನ ಭಕ್ತಿ, ಶೂನ್ಯ ಕಾಣಾ, ಕಲಿದೇವರದೇವಾ.

ಆದರೆ, ಮಾಡಿದೆನೆಂಬುದು ಮನದಲ್ಲಿ ಹೊಳೆಯದ ನಿರವಯಲ ನಿರಂಜನ ಮೂರ್ತಿ ಗುರು ಬಸವಣ್ಣನವರು ತಾನೆ ಮಾಡಿದೆನೆಂದು ಅಹಂಕಾರಿಗಳಾಗುವುದಿಲ್ಲ. ಕೂಡಲ ಸಂಗಮದೇವಾ, ನಿಮ್ಮಿಂದ ಸಕಲ ಸನುಮತವ ನಾನರಿದೆನಲ್ಲದೆ, ಎನ್ನಿಂದ ನೀನಾದೆ ಎಂಬುದ ನಿಮ್ಮ ಪ್ರಮಥರು ಮೆಚ್ಚರು ನೋಡಯ್ಯಾ ಎಂದು ವಿನಯದಿಂದ ನುಡಿಯುತ್ತಾರೆ.

ಎನ್ನಂತರಂಗದೊಳಗೆ ಅರಿವಾಗಿ, ಎನ್ನ ಬಹಿರಂಗದೊಳಗೆ ಆಚಾರವಾಗಿ ನೀನೆಡೆಗೊಂಡು, ಎನ್ನ ಮನದೊಳಗೆ ಘನ ನೆನಹಾಗಿ ಮೂರ್ತಿಗೊಂಡು, ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲವೆಂಬ ಚತುರ್ವಿಧವನೂ ಎನಗೆ ಸ್ವಾಯತವ ಮಾಡಿ ತೋರಿ, ಪ್ರಾಣಲಿಂಗವೆಂಬ ಹಾದಿಯ ಸೆರಗ ತೋರಿಸಿ, ಎಲ್ಲಾ ಅಸಂಖ್ಯಾತರನೂ ಪಾವನವ ಮಾಡಿದಿರಾಗಿ ಕೂಡಲಸಂಗಮದೇವಾ, ನಿಮ್ಮಿಂದ ಸಕಲ ಸನುಮತವ ನಾನರಿದೆನಲ್ಲದೆ, ಎನ್ನಿಂದ ನೀನಾದೆ ಎಂಬುದ ನಿಮ್ಮ ಪ್ರಮಥರು ಮೆಚ್ಚರು ನೋಡಯ್ಯಾ.

ಕೂಡಲಸಂಗಮದೇವರನ್ನು ತನ್ನೊಳಗೆ ಅರಿವಾಗಿ ಕಂಡುಕೊಂಡರು, ಸದಾಚಾರದಲ್ಲಿ ಲಿಂಗವಾಗಿ ಕಂಡರು, ಈ ಅರಿವು ಆಚಾರವನ್ನು ಸಾರ್ವತ್ರಿಕರಣಗೊಳಿಸಿ ಜಂಗಮವಾದರು. ಅರಿವುಆಚಾರಅನುಭಾವದಲ್ಲಿ ಗುರುಲಿಂಗಜಂಗಮವನ್ನು ಕಂಡರು. ತನುಮನಧನವನ್ನು ಗುರುಲಿಂಗಜಂಗಮಕ್ಕಿತ್ತು ಪ್ರಸಾದಿಯಾದರು. ದೇವರನ್ನು ಹೊರಗೆ ಹುಡುಕುವುದನ್ನು ನಿಲ್ಲಿಸಿದರು. ಎಲ್ಲರನ್ನೂ ಸಮಚಿತ್ತದ ಪ್ರಸಾದಿಗಳನ್ನಾಗಿಸಿದರು. ಮರ್ತ್ಯಲೋಕ ಶಿವಲೋಕವೆರಡಕ್ಕೂ ನಿಚ್ಚಣಿಗೆಯಾದರು. ಇದನ್ನು ಗಮನಿಸಿದ ಅಲ್ಲಮಪ್ರಭುದೇವರಿಗೆ, ಬಸವಣ್ಣನವರಲ್ಲಿಯೇ ಗುಹೇಶ್ವರಲಿಂಗದ ವಿಳಾಸ ಕಂಡುಬಂದಿತು.

ಆಯಿತ್ತು ಬಸವಾ ನಿನ್ನಿಂದ ಗುರುಸ್ವಾಯತವೆನಗೆ.
ಆಯಿತ್ತು ಬಸವಾ ನಿನ್ನಿಂದ ಲಿಂಗಸ್ವಾಯತವೆನಗೆ.
ಆಯಿತ್ತು ಬಸವಾ ನಿನ್ನಿಂದ ಜಂಗಮಸ್ವಾಯತವೆನಗೆ.
ಆಯಿತ್ತು ಬಸವಾ ನಿನ್ನಿಂದ ಪ್ರಸಾದಸ್ವಾಯತವೆನಗೆ.
ಇಂತೀ ಚತುರ್ವಿಧ ಸ್ವಾಯತವನು ನೀನೆ ಮಾಡಿದೆಯಾಗಿ
ನಮ್ಮ ಗುಹೇಶ್ವರಲಿಂಗಕ್ಕೆ ವಿಳಾಸವಾದೆಯಲ್ಲಾ ಸಂಗನಬಸವಣ್ಣಾ.

ಬಸವಣ್ಣನವರಲ್ಲಿ ಗುಹೇಶ್ವರಲಿಂಗದ ಆಯತಸ್ವಾಯತಸನ್ನಿಹಿತವನ್ನು ಕಂಡ ಪ್ರಭುದೇವರು, ಬಸವಪಥದಲ್ಲಿ ಮುನ್ನಡೆದು ಸದ್ಭಕ್ತರಾದರು.

ಅದ್ವೈತವ ನುಡಿದು ಅಹಂಕಾರಿಯಾದೆನಯ್ಯಾ.
ಬ್ರಹ್ಮವ ನುಡಿದು ಭ್ರಮಿತನಾದೆನಯ್ಯಾ.
ಶೂನ್ಯವ ನುಡಿದು ನಾನು ಸುಖದುಃಖಕ್ಕೆ ಗುರಿಯಾದೆನಯ್ಯಾ.
ಗುಹೇಶ್ವರಾ ನಿಮ್ಮ ಶರಣ ಸಂಗನಬಸವಣ್ಣನ ಸಾನ್ನಿಧ್ಯದಿಂದ
ನಾನು ಸದ್ಭಕ್ತನಾದೆನಯ್ಯಾ.

ತನ್ನ ತಾನರಿದು, ಅರಿವೇ ಗುರುವಾಗಿ, ಅರಿವಿನಿಂದೊಡಗೂಡಿದ ಆಚಾರವೇ ಲಿಂಗವಾಗಿ, ನಿಷ್ಠೆಯೇ ಜಂಗಮವಾಗಿ, ಸೋಹಂ ತತ್ವವನ್ನು ಪಸರಿಸಲು ದಾಸೋಹಂ ಎಂದು ಸೇವೆಗೈಯುತ್ತ, ಬಸವಾದಿ ಶರಣರ ಹಾದಿಯಲ್ಲಿ ನಡೆದು, ಮೌಢ್ಯತೆಯ ಭಕ್ತಿಯಿಂದ ಮುಕ್ತರಾಗಿ ಸದ್ಭಕ್ತರಾದರೆ ಮರ್ತ್ಯಲೋಕ ಶಿವಲೋಕವಾಗಿ ಮತ್ತೆ ಕಲ್ಯಾಣ ವಾದೀತು .

ಶರಣ . ಶಿವಶರಣಪ್ಪ ಮದ್ದೂರ್
ಜಂಗಮ ವಾಣಿ : 8904656742
ಬೆಂಗಳೂರು560098